


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 09-03-2021 ಪ್ರಶ್ನೆ ಸಂಖ್ಯೆ : 717(821)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಹೆಚ್. ಎಂ. ರಮೇಶ ಗೌಡ(ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 09-03-2021

ಉತ್ತರಿಸುವ ಸಚಿವರು: ಮಾನ್ಯ ಸಹಕಾರ ಸಚಿವರು

ವಿಷಯ : ಸಹಕಾರ ಇಲಾಖೆಯಿಂದ ಕಳೆದ ಸಾಲುಗಳಲ್ಲಿ ಮಾಡಿದ ಸಾಲಮನ್ನಾ ಯೋಜನೆ ಕುರಿತು

(ಅ) ಸಹಕಾರ ಇಲಾಖೆಯಿಂದ ಕಳೆದ ಸಾಲುಗಳಲ್ಲಿ ಸಾಲ ಮನ್ನಾ ಯೋಜನೆಯಡಿಯಲ್ಲಿ ಸಾಲಮನ್ನಾ ಮಾಡಲು ವಿವಿಧ ಸಹಕಾರ ಸಂಸ್ಥೆಗಳಿಗೆ ಸಹಾಯಧನ ಬಿಡುಗಡೆ ಮಾಡಲಾಗಿದೆಯೇ; ಹಾಗಿದ್ದಲ್ಲಿ, ಸಹಾಯಧನದ ವಿವರವನ್ನು ಜಿಲ್ಲಾವಾರು ಸಹಕಾರ ಸಂಸ್ಥೆಗಳ ವಿವರದೊಂದಿಗೆ ಒದಗಿಸುವುದು;

(ಆ) ರಾಜ್ಯದ ಹಲವು ಜಿಲ್ಲೆಗಳಲ್ಲಿ ವಿವಿಧ ಸಹಕಾರಿ ಸಂಸ್ಥೆಗಳು ಸಹಾಯಧನದ ಹಣವನ್ನು ದುರುಪಯೋಗಪಡಿಸಿಕೊಂಡು ಫಲಾನುಭವಿಗಳಿಗೆ ಅನ್ಯಾಯವೆಸಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಅಂತಹ ಪ್ರಕರಣಗಳ ವಿವರ ನೀಡುವುದು ಹಾಗೂ ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು)

(ಇ) ವಿಚಾರಣೆ ನಡೆಸುತ್ತಿರುವ ಪ್ರಕರಣಗಳೆಷ್ಟು; ಅವು ಯಾವುವು? (ಸಹಕಾರ ಸಂಸ್ಥೆಗಳ ವಿವರಗಳನ್ನು ಒದಗಿಸುವುದು)